ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ : 24ನೇ ಜುಲೈ, 2019

9. ಗೋವಾ ಸರ್ಕಾರವು ರಾಜ್ಯದಿಂದ ವಿದ್ಯುತ್‌ಲೈನ್ ಎಳೆಯಲು ಕೇಂದ್ರಕ್ಕೆ ಪ್ರಸ್ತಾವನೆ ಸಲ್ಲಿಸುವ ಕುರಿತು

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

564 (696) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಷ್ಟ್ರೀಯ ವಿದ್ಯುತ್ ಜಾಲ ವಿತರಣಾ ಕೇಂದ್ರ ನರೇಂದ್ರದಲ್ಲಿದ್ದು, ಗೋವಾ ಸರ್ಕಾರವು ಕಂಪನಿಯೊಂದರೊಂದಿಗೆ ಒಪ್ಪಂದ ಮಾಡಿಕೊಂಡು 400 ಮೆಗಾ ವ್ಯಾಟ್ ವಿದ್ಯುತ್ ಲೈನ್ ಎಳೆದು ಪೂರೈಸಲು ಯೋಜನೆ ಹಾಕಿಕೊಂಡಿರುವುದು ನಿಜವೇ;

(ಆ) ಈ ಯೋಜನೆಯನ್ನು ಕೈಗೆತ್ತಿಕೊಳ್ಳುವುದಾದರೆ ನರೇಂದ್ರದಿಂದ ಗೋವಾದ ಎಕ್ಸಡೆಂ ತನಕ ಸುಮಾರು 150 ಕಿ.ಮೀ. ವರೆಗೂ ವಿದ್ಯುತ್ ಲೈನ್ ಅಳವಡಿಸಬೇಕಾಗುತ್ತಿದ್ದು, ಈ ಮಾರ್ಗದಲ್ಲಿ ಬೆಳಗಾವಿ ಜಿಲ್ಲೆಯ 101 ಹೆಕ್ಟೇರ್, ಧಾರವಾಡ ಜಿಲ್ಲೆಯ 4.786 ಹೆಕ್ಟೇರ್ ಹಾಗೂ ಉತ್ತರ ಕನ್ನಡ ಜಿಲ್ಲೆಯ 70.55 ಹೆಕ್ಟೇರ್ ಅರಣ್ಯ ಭೂಮಿ ಬಳಕೆಯಾಗುತ್ತಿದ್ದು, ಇದರಿಂದ ಸಾವಿರಾರು ಮರಗಳ ಮಾರಣ ಹೋಮವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಉತ್ತರ ಕನ್ನಡ ದಾಂಡೇಲಿ, ಆನೇಧಾಮ, ದಾಂಡೇಲಿಯ ವನ್ಯ ಜೀವಿ ಸುರಕ್ಷಿತ ವಲಯ ಹಾಗೂ ಬೆಳಗಾವಿಯ ಭೀಮಘಡದ ಪರಿಸರ ಸೂಕ್ಷ್ಮ ವಲಯ ಮೂಲಕ ಪ್ರಸ್ತಾವಿತ ವಿದ್ಯುತ್ ಮಾರ್ಗ ಹಾದು ಹೋಗಲಿದ್ದು ಇದರಿಂದ ಪರಿಸರಕ್ಕೆ ಧಕ್ಕೆಯಾಗುತ್ತಿರುವ ಬಗ್ಗೆ ಸಾರ್ವಜನಿಕರು ವಿರೋಧ ವ್ಯಕ್ತಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಈ  ಯೋಜನೆಯನ್ನು ಸ್ಥಗಿತಗೊಳಿಸಲು ಸರ್ಕಾರ ಯೋಚಿಸಿದೆಯೇ? (ವಿವರ ನೀಡುವುದು)